





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಹೇಳಿ ಬಿಡಿರಿ! ಓ, ಸತ್ಯನಿಷೇಧಿಗಳೇ,[1] قُلْ يٰاَيُّهَا الْكٰفِرُوْنَ ①

2. ನೀವು ಆರಾಧಿಸುವವುಗಳನ್ನು ನಾನು ಆರಾಧಿಸುವುದಿಲ್ಲ-[2] لَآ اَعْبُدُ مَا تَعْبُدُوْنَ ②

3. ಮತ್ತು ನಾನು ಆರಾಧಿಸುವವನನ್ನು ನೀವು ಆರಾಧಿಸುವವರಲ್ಲ.[3] وَلَآ اَنْتُمْ عٰبِدُوْنَ مَآ اَعْبُدُ ③

4. ಮತ್ತು ನೀವು ಆರಾಧಿಸಿದವುಗಳ ಆರಾಧನೆಯನ್ನು ನಾನೂ ಮಾಡುವವನಲ್ಲ-[4] وَلَآ اَنَا عَابِدٌ مَّا عَبَدْتُّمْ ④

5. ನಾನು ಆರಾಧಿಸುವವನನ್ನು ನೀವೂ ಆರಾಧಿಸುವವರಲ್ಲ. وَلَآ اَنْتُمْ عٰبِدُوْنَ مَآ اَعْبُدُ ⑤

6. ನಿಮಗೆ ನಿಮ್ಮ ಧರ್ಮ ಮತ್ತು ನನಗೆ ನನ್ನ ಧರ್ಮ.[5] لَكُمْ دِيْنُكُمْ وَلِيَ دِيْنِ ⑥ ع

---

1. ಅರ್ಥಾತ್- ತನ್ನ ಪ್ರವಾದಿತ್ವ ಮತ್ತು ನಾನು ತಂದಿರುವ ಬೋಧನೆಗಳನ್ನು ನಂಬಲು ನಿರಾಕರಿಸುವ ಜನರೇ!
2. ಸತ್ಯನಿಷೇಧಿಗಳು ಇತರ ಆರಾಧ್ಯರುಗಳ ಜತೆಗೆ ಅಲ್ಲಾಹನ ಆರಾಧನೆಯನ್ನೂ ಮಾಡುತ್ತಿದ್ದರು. ಆದರೆ ಬಹುದೇವಾರಾಧನೆ ಮಾಡುತ್ತಾ ಅಲ್ಲಾಹನ ಆರಾಧನೆ ಮಾಡುವುದು ಸುತರಾಂ ಆರಾಧನೆಯೆನಿಸಿಕೊಳ್ಳದು. ಆದ್ದರಿಂದ ಬಹುದೇವ ವಿಶ್ವಾಸಿಗಳ ಎಲ್ಲಾ ಆರಾಧ್ಯರುಗಳ ಆರಾಧನೆಯ ಬಗ್ಗೆ ನಿರಾಕರಣೆ ವ್ಯಕ್ತಪಡಿಸಲಾಗಿದೆ.
3. ಅರ್ಥಾತ್- ಯಾವ ಗುಣವಿಶೇಷತೆಗಳುಳ್ಳ ದೇವನನ್ನು ನಾನು ಆರಾಧಿಸುತ್ತೇನೋ ಆ ಗುಣ ವಿಶೇಷತೆಗಳುಳ್ಳ ದೇವನನ್ನು ನೀವು ಆರಾಧಿಸುವುದಿಲ್ಲ.
4. ಅರ್ಥಾತ್- ಯಾವ ಆರಾಧ್ಯರುಗಳನ್ನು ಇದಕ್ಕೆ ಮೊದಲು ನೀವು ಮತ್ತು ನಿಮ್ಮ ಪೂರ್ವಜರು ಆರಾಧನೆ ಮಾಡಿದ್ದಾರೋ ಅವುಗಳನ್ನು ನಾನೆಂದೂ ಆರಾಧಿಸಲಾರೆ.
5. ಅರ್ಥಾತ್- ಧರ್ಮದ ವಿಷಯದಲ್ಲಿ ನನಗೂ ನಿಮಗೂ ಯಾವುದೇ ಹೋಲಿಕೆಯಿಲ್ಲ. ನನ್ನ ಮಾರ್ಗವೇ ಬೇರೆ, ನಿಮ್ಮ ಮಾರ್ಗವೇ ಬೇರೆ.